## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1543 (1870)
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 22-03-2021
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಖಾನಾಪುರ ತಾಲ್ಲೂಕಿನ ಪಶ್ಚಿಮಘಟ್ಟ ಪ್ರದೇಶದಲ್ಲಿನ ಹುಲಿ ಸಂರಕ್ಷಣೆ ಅಭಯಾರಣ್ಯ ವ್ಯಾಪ್ತಿಯ ಹಳ್ಳಿಗಳು ಮೂಲ ಸೌಕರ್ಯಗಳ ಕೊರತೆಯಿಂದ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಳಗಾವಿ ಜಿಲ್ಲೆ ಖಾನಾಪುರ ತಾಲ್ಲೂಕಿನಲ್ಲಿ ಯಾವುದೇ ಹುಲಿ ಸಂರಕ್ಷಿತ ಪ್ರದೇಶ ಇರುವುದಿಲ್ಲ.<br>ಆದರೆ ಖಾನಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಭೀಮಘಡ ವನ್ಯಜೀವಿಧಾಮವು ಬರುತ್ತಿದ್ದು, ಸರ್ಕಾರದ ನಿಯಮಾವಳಿಯ ಪ್ರಕಾರ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಸದರಿ ಪಶ್ಚಿಮಘಟ್ಟ ಪ್ರದೇಶದಲ್ಲಿನ ಗ್ರಾಮಗಳಲ್ಲಿ ಮೂಲ ಸೌಕರ್ಯಗಳನ್ನು ಕಲ್ಪಿಸಲು ಅನುಕೂಲವಾಗುವಂತೆ ತೆಗೆದುಕೊಂಡ ಕ್ರಮಗಳೇನು; | ಪಶ್ಚಿಮಘಟ್ಟ ಪ್ರದೇಶದಲ್ಲಿ ಬರುವ ಗ್ರಾಮಗಳಲ್ಲಿ ಸಾರ್ವಜನಿಕರಿಗೆ ಮೂಲ ಸೌಕರ್ಯಗಳನ್ನು ಕಲ್ಪಿಸಲು ಅನುಕೂಲವಾಗುವಂತೆ ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಗಿದೆ:-<br>1. ಗ್ರಾಮಸ್ಥರಿಗೆ ಗ್ಯಾಸ್ ಸಿಲೆಂಡರ್ ಮತ್ತು ಸ್ಟೌವ್‌ಗಳನ್ನು ಎಸ್.ಸಿ.ಪಿ ಮತ್ತು ಟಿ.ಎಸ್.ಪಿ ಯೋಜನೆಯಡಿ ವಿತರಿಸಲಾಗಿದೆ.<br>2. ಕಾಡು ಪ್ರಾಣಿಗಳ ದಾಳಿಯಿಂದ ಉಂಟಾದ ಬೆಳೆ, ಸಾಕುಪ್ರಾಣಿ ಹಾನಿಗೆ ಇಲಾಖೆಯಿಂದ ನಿಯಮಾನುಸಾರ ಪರಿಹಾರವನ್ನು ನೀಡಲಾಗುತ್ತಿದೆ.<br>3. ಹಾಳಾದ ರಸ್ತೆಗಳನ್ನು ಅಲ್ಲಲ್ಲಿ ರಿಪೇರಿ ಮಾಡಲಾಗಿದೆ.<br>4. ಭೀಮಘಡ ವನ್ಯಜೀವಿಧಾಮ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳ ಪುನರ್ವಸತಿ ಬಗ್ಗೆ ಕ್ರಮಕೈಗೊಳ್ಳಲಾಗುತ್ತಿದೆ.<br>5. ಮೂಲ ಸೌಕರ್ಯಗಳನ್ನು ಕಲ್ಪಿಸಲು ಸಂಬಂಧಿಸಿದ ಉಪಯೋಗಿ ಸಂಸ್ಥೆಯವರು ಪ್ರಸ್ತಾವನೆ ಸಲ್ಲಿಸಿದಲ್ಲಿ ಅರಣ್ಯ (ಸಂರಕ್ಷಣೆ) ಕಾಯ್ದೆ, 1980ರಡಿ ಕ್ರಮ ಜರುಗಿಸಲಾಗುತ್ತಿದೆ. |
| ಇ) | ಹುಲಿ ಅಭಯಾರಣ್ಯ ವ್ಯಾಪ್ತಿಯಲ್ಲಿ ಬರುವ ಖಾನಾಪೂರ ತಾಲ್ಲೂಕಿನ ಪ್ರದೇಶಗಳು ಎಷ್ಟು; | ಬೆಳಗಾವಿ ಜಿಲ್ಲೆ ಖಾನಾಪುರ ತಾಲ್ಲೂಕಿನಲ್ಲಿ ಯಾವುದೇ ಹುಲಿ ಸಂರಕ್ಷಿತ ಪ್ರದೇಶ ಇರುವುದಿಲ್ಲ.<br>ಭೀಮಘಡ ವನ್ಯಜೀವಿಧಾಮ ವ್ಯಾಪ್ತಿಯಲ್ಲಿ ಖಾನಾಪುರ ತಾಲ್ಲೂಕಿನ ಅರಣ್ಯ ಭೂಮಿ 19,042.00 |

| | | |
|---|---|---|
| | | ಹೆಕ್ಟೇರ್ ಹಾಗೂ ಕಂದಾಯ ಭೂಮಿ 2,624.25 ಹೆಕ್ಟೇರ್ ಇರುತ್ತದೆ. |
| ಈ) | ಈ ಅಭಯಾರಣ್ಯ ಪ್ರದೇಶದಲ್ಲಿ ಒಟ್ಟು ಎಷ್ಟು ಗ್ರಾಮಗಳು ಹಾಗೂ ಎಷ್ಟು ಸಣ್ಣ ಪುಟ್ಟ ಹಳ್ಳಿಗಳು ಬರುತ್ತವೆ; ಅವು ಯಾವುವು: | ಭೀಮಘಡ ವನ್ಯಜೀವಿಧಾಮ ವ್ಯಾಪ್ತಿಯಲ್ಲಿ ಒಟ್ಟು 13 ಗ್ರಾಮಗಳು ಬರುತ್ತಿದ್ದು, ಅವುಗಳ ವಿವರ ಈ ಕೆಳಗಿನಂತೆ ಇರುತ್ತದೆ.<br>1) ಹೋಲ್ಡಾ 2) ಪಾಸ್ಟೋಲಿ 3) ಚಿಕಲೆ 4) ದೇಗಾಂವ 5) ಗವಾಳಿ 6) ಮೆಂಡಿಲ (ತಳೇವಾಡಿ) 7) ಕೃಷ್ಣಾಪೂರ 8) ಅಮಗಾಂವ 9) ತೆನಾಲಿ– ಭೀಮಗಡ 10) ಕೊಂಗಳಾ 11) ಅಬನಾಳಿ 12) ಹೆಮ್ಮಡಗಾ 13) ಜಮಗಾಂವ. |
| ಉ) | ಸದರಿ ಅಭಯಾರಣ್ಯ ಪ್ರದೇಶ ವ್ಯಾಪ್ತಿಯ ಹಳ್ಳಿಗಳಲ್ಲಿ ಮೂಲ ಸೌಕರ್ಯಗಳ ಕಾಮಗಾರಿ ಕೈಗೊಳ್ಳಲು ಮತ್ತು ರಸ್ತೆ ಕಾಮಗಾರಿಗಳಿಗೆ ಅರಣ್ಯ ಇಲಾಖೆಯಿಂದ ಅಡಚಣೆಯಾಗದಂತೆ ಸಹಕರಿಸಲು ಏನೇನು ಕ್ರಮಗಳನ್ನು ಕೈಗೊಳ್ಳಲಾಗಿದೆ? (ವಿವರ ಒದಗಿಸುವುದು) | ಪರಿಸರ, ಅರಣ್ಯ ಹಾಗೂ ಹವಾಮಾನ ಬದಲಾವಣೆ, ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ರವರ ಮಾರ್ಗಸೂಚಿ ದಿನಾಂಕ: 22.12.2014 ಮತ್ತು 17.09.2019ರ ಪ್ರಕಾರ ಅಭಯಾರಣ್ಯ ವ್ಯಾಪ್ತಿಯಲ್ಲಿ ಬರುವ ರಸ್ತೆಗಳನ್ನು ಯಥಾಸ್ಥಿತಿಯಲ್ಲಿ ದುರಸ್ತಿಗೊಳಿಸಬಹುದಾಗಿರುತ್ತದೆ. ಅಲ್ಲದೆ ರಸ್ತೆ ಅಗಲೀಕರಣ, ಉನ್ನತೀಕರಣಗೊಳಿಸಲು ರಾಷ್ಟ್ರೀಯ ವನ್ಯಜೀವಿ ಮಂಡಳಿಯ ಅನುಮೋದನೆ ಪಡೆಯುವುದು ಅವಶ್ಯಕವಾಗಿರುತ್ತದೆ. ಮೂಲ ಸೌಕರ್ಯಗಳ ಕಾಮಗಾರಿ ಕೈಗೊಳ್ಳಲು ಮತ್ತು ರಸ್ತೆ ಕಾಮಗಾರಿಗಳಿಗೆ ಅರಣ್ಯ ಭೂಮಿಯ ಅವಶ್ಯಕತೆ ಇದ್ದಲ್ಲಿ ಸಂಬಂಧಿಸಿದ ಉಪಯೋಗಿ ಸಂಸ್ಥೆಯವರು ಅರಣ್ಯ (ಸಂರಕ್ಷಣೆ) ಕಾಯ್ದೆ, 1980ರಡಿ ಇದುವರೆಗೂ ಯಾವುದೇ ಪ್ರಸ್ತಾವನೆಯನ್ನು ಸಲ್ಲಿಸಿರುವುದಿಲ್ಲ. ಪ್ರಸ್ತಾವನೆಯನ್ನು ಸಲ್ಲಿಸಿದ್ದಲ್ಲಿ ನಿಯಮಾನುಸಾರ ಪರಿಶೀಲಿಸಿ ಕೇಂದ್ರ ಸರ್ಕಾರಕ್ಕೆ ಅನುಮೋದನೆಗಾಗಿ ಸಲ್ಲಿಸಲಾಗುವುದು. |

**ಸಂಖ್ಯೆ: ಅಪಜೀ 25 ಎಫ್‌ಎಫ್‌ಎಂ 2021**

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು